# ಸಿ. ಪಿ. ರಾಜರಾಂ





ಕರ್ನಾಟಕ ಶಿಲ್ಪಕಲಾ ಅಕಾಡೆಮಿ
ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು

ಶಿಲ್ಪಕಲಾವಿದರ ಮಾಲೆ : ೮

# ಸಿ.ಪಿ. ರಾಜಾರಾಮ್

ಕೆ.ವಿ. ಸುಬ್ರಹ್ಮಣ್ಯಂ




ಕರ್ನಾಟಕ ಶಿಲ್ಪಕಲಾ ಅಕಾಡೆಮಿ
ಮೇಲ್ಮನೆ, ಕನ್ನಡಭವನ
ಜೆ.ಸಿ. ರಸ್ತೆ, ಬೆಂಗಳೂರು – 560 002

**C. P. RAJARAM**

A Monograph by

**K.V. Subramanyam**

*Published by*

N. Marishamachar

Registrar

Karnataka Shilpakala Academy

Ist Floor, Kannada Bhavana

J.C. Road, Bangalore - 560 002

ಮೊದಲ ಮುದ್ರಣ : 2004

ಪ್ರತಿಗಳು : 1000

ಬೆಲೆ ರೂ. 15-00

ಮುದ್ರಕರು

**ಫ್ರೆಂಡ್ಸ್ ಕಾಮ್‌ಟೆಕ್**

5 ನೇ ಮುಖ್ಯರಸ್ತೆ, ಚಾಮರಾಜಪೇಟೆ

ಬೆಂಗಳೂರು - 560 018

© 2652 8454

# ಮೊದಲ ಮಾತು

ನಮ್ಮ ರಾಜ್ಯ ಶಿಲ್ಪಕಲೆಗೆ ವಿಶ್ವದಲ್ಲೇ ಹೆಸರು ಪಡೆದಿದ್ದು, 'ಶಿಲ್ಪಕಲೆಯ ತವರೂರು' ಎಂದು ಕರೆಯಲ್ಪಟ್ಟಿದೆ. ಈ ನಾಡಿನಲ್ಲಿ ಅನೇಕ ಶಿಲ್ಪ ಶೈಲಿಗಳು ಹುಟ್ಟಿ, ಅವು ತಮ್ಮದೇ ಆದ ವಿಶಿಷ್ಟ ಸ್ಥಾನವನ್ನು ಪಡೆದಿವೆ. ನಮ್ಮ ರಾಜ್ಯದಲ್ಲಿ ಶಿಲ್ಪಕಲೆಗಾಗಿ ದುಡಿದವರು ಹಲವಾರು ಶಿಲ್ಪಿಗಳು. ಕೆಲವು ಶಿಲ್ಪಿಗಳು 'ಶಿಲ್ಪ ರಚಿಸುವುದೇ ತಮ್ಮ ಕಾಯಕ'ವೆಂದು ತಿಳಿದು, ಶಿಲ್ಪದ ಮೇಲೆ ತಮ್ಮ ಹೆಸರುಗಳನ್ನು ನಮೂದಿಸಿರುವುದಿಲ್ಲ. ಸಾಂಪ್ರದಾಯಿಕವಾಗಿ ಶಿಲ್ಪಕಲೆ ಬೆಳೆದು ಬಂದಿದ್ದು ಇಂದಿಗೂ ಈ ಕಲೆಗಳನ್ನು ಉಳಿಸಿ, ಬೆಳೆಸಿಕೊಂಡು ಬಂದಿರುವವರು ನಮ್ಮಲ್ಲಿದ್ದಾರೆ. ಶಿಲ್ಪ ಕಲಾ ಅಕಾಡೆಮಿ ಇಂತಹ ಹಿರಿಯ ಶಿಲ್ಪಕಲಾವಿದರು ಮತ್ತು ಅವರ ಕೃತಿಗಳ ಬಗ್ಗೆ ಪುಸ್ತಕಗಳನ್ನು ಪ್ರಕಟಿಸುವ ಯೋಜನೆಯನ್ನು ಪ್ರಾರಂಭಿಸಿದೆ. ಈ ಪುಸ್ತಕಗಳು ಈ ಶಿಲ್ಪಿಗಳ ಮತ್ತು ಕೃತಿಗಳ ಪರಿಚಯ ಮಾಡಿಸುವುದರ ಜೊತೆಗೆ ರಾಜ್ಯದಲ್ಲಿ ಶಿಲ್ಪಕಲೆ ಬೆಳೆದು ಬಂದ ದಾರಿ ಮತ್ತು ಅದರ ಚರಿತ್ರೆಯನ್ನು ತಿಳಿಯಲು ಸಹಾಯಕವಾಗುವುದು.

ಈ ಯೋಜನೆಯಲ್ಲಿ ನಮ್ಮ ನಾಡಿನ ಹೆಸರಾಂತ ಸಮಕಾಲೀನ ಶಿಲ್ಪಕಲಾವಿದರಾದ ಸಿ.ಪಿ. ರಾಜರಾಂ ಅವರ ಬಗ್ಗೆ, ಹೆಸರಾಂತ ಕಲಾ ವಿಮರ್ಶಕರಾದ ಶ್ರೀ ಕೆ.ವಿ. ಸುಬ್ರಹ್ಮಣ್ಯಂ ಅವರು ಬರೆದಿದ್ದಾರೆ. ಅವರಿಗೆ ಅಕಾಡೆಮಿ ಪರವಾಗಿ ವಂದನೆಗಳನ್ನು ಸಲ್ಲಿಸುವೆ.

ಶ್ರೀ ಸಿ.ಪಿ. ರಾಜಾರಾಂ ಅವರು ನನಗೆ ತಿಳಿದಮಟ್ಟಿಗೆ, ಕರ್ನಾಟಕದಲ್ಲಿ ಆಧುನಿಕ ಶಿಲ್ಪಕಲೆ ಪ್ರಾರಂಭಿಸಿದವರಲ್ಲಿ ಮೊದಲಿಗರೆನ್ನಬಹುದು. ಇಂತಹ ಹಿರಿಯ ಶಿಲ್ಪಿಯ ಬಗ್ಗೆ ಅಕಾಡೆಮಿ ಈ ಕಿರು ಪುಸ್ತಕವನ್ನು ಪ್ರಕಟಿಸುತ್ತಿದೆ. ನಮ್ಮ ಈ ಪ್ರಯತ್ನವನ್ನು ಕಲಾಭಿಮಾನಿಗಳು ಸ್ವಾಗತಿಸುವರೆಂದು ಆಶಿಸುವೆ.

ಬೆಂಗಳೂರು

ಎನ್.ಜಿ. ನೀಲಕಂಠಾಚಾರ್
ಅಧ್ಯಕ್ಷರು
ಕರ್ನಾಟಕ ಶಿಲ್ಪಕಲಾ ಅಕಾಡೆಮಿ

# ನಿಮ್ಮೊಂದಿಗೆ...

ಚಪ್ಪುಡಿರ ಪೊನ್ನಪ್ಪ ರಾಜಾರಾಮ್ ಭಾರತೀಯ ಹಾಗೂ ಕನ್ನಡದ ಆಧುನಿಕ ಶಿಲ್ಪಕಲೆಗೆ ನೀಡಿರುವ ಕೊಡುಗೆ ಮೌಲಿಕವಾದುದು. ಈ ಪುಟ್ಟ ಪುಸ್ತಕ ಬರೆಯಲು ಕಾರಣರಾದ ಶಿಲ್ಪಕಲಾ ಅಕಾಡೆಮಿಯ ಅಧ್ಯಕ್ಷರು, ಸದಸ್ಯರು, ಹಾಗೂ ರಿಜಿಸ್ಟ್ರಾರ್ ಎನ್. ಮರಿಶಾಮಾಚಾರ್‌ರವರುಗಳಿಗೆ ಆಭಾರಿಯಾಗಿದ್ದೇನೆ. ರಾಜಾರಾಮ್ ರವರ ಶಿಲ್ಪಗಳನ್ನು ನೋಡಿ ಅನುಭವಿಸಲು, ಅವರ ಹಲವು ಪುಸ್ತಕಗಳನ್ನು ಗಮನಿಸಲು ತಮ್ಮ ಸಮಯ ನೀಡಿ ಬೆಂಗಳೂರಿನ ಮ್ಯೂಸಿಯಂನ ಉಪನಿರ್ದೇಶಕರಾದ ಶ್ರೀ ಸಿದ್ಧನಗೌಡ ಮತ್ತು ಸಹಾಯಕ ನಿರ್ದೇಶಕರಾದ ಶ್ರೀ ಚಿಕ್ಕಮಾದೇಗೌಡ ಹಾಗೂ ವೆಂಕಟಪ್ಪ ಕಲಾ ಗ್ಯಾಲರಿಯ ಕ್ಯೂರೇಟರ್ ಶ್ರೀಮತಿ ಬಿ. ಎಂ. ಕಮಲಾಬಾಯಿ ನೆರವಾಗಿದ್ದಾರೆ ; ವಂದನೆಗಳು. ರಾಜಾರಾಮ್‌ರವರ ಬದುಕು, ಕಲೆಗಳನ್ನು ಕುರಿತ ಬರಹ, ಪತ್ರಗಳನ್ನು ಸೇರಿಸಿ, ಸಂಪಾದಿಸಿರುವ ಕರ್ನಲ್ ಎ.ಎನ್.ಎಸ್. ಮೂರ್ತಿಯವರಿಗೆ ನಾನು ಋಣಿಯಾಗಿದ್ದೇನೆ.

ಕೆ. ವಿ. ಸುಬ್ರಹ್ಮಣ್ಯಂ

# ಚಪ್ಪುಡಿರ ಪೊನ್ನಪ್ಪ ರಾಜಾರಾಮ್

*Bark and leaf have fallen under the woodcutter's axe and under the imposition of the weather. Not the fecund spirit registered on the graph in the heart of the matter. We consign a log to the flames and there is some dancing matter, We consign a log to a sculptor, and the hidden spirit surrenders before his search and his peculiar application of wonder for nature. Rajaram's art is here, and in a way he is here, as creator, destroyer and preserver.*

**- R.L. Bartholomew, 1965.**

1927ರ ವರ್ಷದ ಬಹುಪಾಲು ಕೆ. ವೆಂಕಟಪ್ಪ ತಮ್ಮ ಕಲಾಕೃತಿಗಳಿಗೆ ಸಂಬಂಧಿಸಿದಂತೆ ಮೈಸೂರಿನಲ್ಲಿ ಅರಸರ ವಿರುದ್ಧ ಕೋರ್ಟಿಗೆ ನಡೆದಾಡುತ್ತಿದ್ದ ಸಂದರ್ಭ.

ಕನ್ನಡದ 'ದೃಶ್ಯ ಕಲಾಲೋಕ' ಹಲವು ಪ್ರಭಾವಗಳನ್ನು ಅರಗಿಸಿಕೊಳ್ಳುತ್ತಲೇ ವಿಶಿಷ್ಟ ಸೃಷ್ಟಿಗಳಿಗೆ ಕಾರಣವಾಗುತ್ತಿದ್ದ ಕಾಲ. ಇದೇ ವರ್ಷ ಕೊಡಗಿನಲ್ಲಿ ಪೊನ್ನಪ್ಪ ರಾಜಾರಾಮ್ (1927-1961) ಜನಿಸಿದರು. ನಂತರದ 23 ವರ್ಷಗಳಲ್ಲಿ ಅವರು ಬಾಂಬೆ ಆರ್ಟ್ ಸೊಸೈಟಿಯಿಂದ ತಮ್ಮ ಶಿಲ್ಪವೊಂದಕ್ಕೆ ಬಹುಮಾನಗಳಿಸುವಷ್ಟು ಎತ್ತರಕ್ಕೆ ಬೆಳೆದದ್ದು ಅಸಾಮಾನ್ಯ ಸಾಧನೆ.

ಕೊಡಗಿನ ಚಪ್ಪುಡಿರ ಪೊನ್ನಪ್ಪ ರಾಜಾರಾಮ್ 1927ರಲ್ಲಿ ಜನನಿಸಿದರು. ತಾಯಿ

ಅಕ್ಕಮ್ಮ, ತಂದೆ ಬ್ರಿಗೇಡಿಯರ್ ಸಿ.ಬಿ. ಪೊನ್ನಪ್ಪ . ಸ್ವಾತಂತ್ರ್ಯದ ಮುಂಬೆಳಕು ಕಾಣಿಸಿಕೊಂಡ ದಿನಗಳಲ್ಲಿಯೇ ಅವರು ಸೈನಿಕವಲಯದಲ್ಲಿ ಸ್ವಾತಂತ್ರ್ಯ ಮತ್ತು ದೇಶಭಕ್ತಿಯ ದೃಷ್ಟಿಗಾಗಿ ಸುಪರಿಚಿತರಾಗಿದ್ದರು. ಹಲವಾರು ಬ್ರಿಟೀಷ್ ಅಧಿಕಾರಿಗಳೊಂದಿಗೆ ಸ್ವಾತಂತ್ರ್ಯ ಕುರಿತು ಖಡ್ಗವನ್ನು ಝಳಪಿಸಿದ್ದ ಅವರ ರೀತಿ ಬಹುಕಾಲ ಸೈನಿಕರ ಭೋಜನ ಶಾಲೆಯಲ್ಲಿ ಚರ್ಚಿಸಲ್ಪಡುತ್ತಿತ್ತು. 1965ರ ಸಂದರ್ಭದಲ್ಲಿಯೂ ಅವರು ರಾಷ್ಟ್ರ ರಕ್ಷಣೆಯ ಕುರಿತ ಆತಂಕ, ಆಸಕ್ತಿಗಳ ಕಾರಣದಿಂದ ಹಲವು ರಾಜಕೀಯ ನಾಯಕರೊಂದಿಗೆ ಪತ್ರ ವ್ಯವಹಾರ ನಡೆಸುತ್ತಿದ್ದರು.

ತಾಯಿ ಅಕ್ಕಮ್ಮ ಕೊಡಗಿನ ರಾಜ ಮನೆತನದ ದಂಡನಾಯಕರಾಗಿದ್ದ ಬೋಪಣ್ಣನವರ ಮೊಮ್ಮಗಳು. ಬಿ. ನಂಜಪ್ಪನವರ ಮಗಳು. ಹಾಗೆಯೇ ರಾಜಾರಾಮ್‌ರವರ ತಂದೆಯವರ ಮುತ್ತಾತ ಕೊಡಗಿನ ರಾಜರ ದಿವಾನರಾಗಿದ್ದರು. ರಾಜಾರಾಮ್‌ರವರ ತಾಯಿ ಉತ್ತಮ ಸಂಗೀತಗಾರ್ತಿ ಎಂಬ ಖ್ಯಾತಿ ಪಡೆದಿದ್ದರು. ಅವರು ಸಿತಾರ್ ನುಡಿಸುವ ಕಾರ್ಯಕ್ರಮಗಳಿಗೆ ಅಭಿಮಾನಿವರ್ಗ ತುಂಬಿ ತುಳುಕುತ್ತಿತ್ತು. ಅವರ ಪಾಲಿಗೆ ಆ ಸಂಗೀತ ಸಂಜೆಗಳು ಅಪರೂಪದ ಸಂದರ್ಭ; ಆನಂದದ ಸಂಭ್ರಮ.

ಸೈನಿಕರಾಗಿ ತಂದೆಯ ಕಾರ್ಯಕ್ಷಮತೆ ಅರಗಿಸಿಕೊಂಡ ರಾಜಾರಾಮ್ ಶಿಲ್ಪಿಯಾಗಿ ತಾಯಿಯ ಸಂಗೀತದ ಲಹರಿಯ ಒಳನೋಟಗಳ ಅನುಭವಗಳಿಸಿದರು. ಸುತ್ತಲಿನ ಬದುಕನ್ನು ಗ್ರಹಿಸಿ, ಕಲೆಯಾಗಿ ಅಭಿವ್ಯಕ್ತಿಸುವ ಸಂವೇದನಾಶೀಲ ತೀವ್ರತೆಯನ್ನೂ ಪಡೆದುಕೊಂಡರು. ಕೊಡಗಿನ ಬೆಟ್ಟಗುಡ್ಡಗಳಲ್ಲಿ ಅಲೆದಾಡುತ್ತಲೇ ಅಲ್ಲಿನ ಗಿಡಮರಗಳ ವಿವಿಧರೂಪ, ಆಕಾರಗಳಲ್ಲಿ ಪಕ್ಷಿ, ಪ್ರಾಣಿಗಳ, ಮನುಷ್ಯರ ರೂಪಗಳನ್ನು ಭಾವ ವೈವಿಧ್ಯವನ್ನು ಅವರ ಕಣ್ಣು ಹುಡುಕಿಕೊಳ್ಳುತ್ತಿತ್ತು.

ಹತ್ತನೆಯ ವಯಸ್ಸಿನಲ್ಲಿ ಬೆಂಗಳೂರಿನ ಸೈಂಟ್ ಜೋಸೆಫ್ಸ್ ಹೈಸ್ಕೂಲಿಗೆ ದಾಖಲು ಗೊಂಡ ರಾಜಾರಾಮ್ ಕ್ರೀಡೆಗಳಲ್ಲಿ ಉತ್ತಮ ಸಾಧನೆ ಪ್ರದರ್ಶಿಸಿ, ಅಸಾಮಾನ್ಯ ವಿದ್ಯಾರ್ಥಿ ಎನ್ನಿಸಿಕೊಂಡರು. ಅದೇ ಸಂದರ್ಭದಲ್ಲಿ ಮರಗೆತ್ತನೆಯಲ್ಲಿ ಅವರು ಆಸಕ್ತರಾದರು. ಅವರ ಹಲವು ಹವ್ಯಾಸಗಳಲ್ಲಿ ಛಾಯಾಚಿತ್ರಣ, ಹಡಗು, ವಿಮಾನಗಳ ಮಾದರಿ ತಯಾರಿಕೆಗಳಲ್ಲಿ ಉತ್ತಮ ಕುಶಲತೆಯನ್ನು ತೋರಿದರು. ಆದರೆ ಈ ಎಲ್ಲ ಹವ್ಯಾಸಗಳ ನಡುವೆ ಮರದ ತುಣುಕುಗಳಲ್ಲಿ ಪೆನ್‌ನೈಫ್‌ನಿಂದ ಕೆತ್ತನೆ ಮಾಡಿ ವಿಶಿಷ್ಟ ರೂಪಗಳನ್ನು ಕಂಡುಕೊಂಡು ಖುಷಿ ಪಡುವುದು ಅವರಿಗೆ ಹೆಚ್ಚು ಪ್ರಿಯವಾಗಿತ್ತು.

ಓದಿನಲ್ಲಿ ಹೆಚ್ಚಿನ ಆಸಕ್ತಿಯನ್ನು ತೋರಲೇ ಬೇಕಿದ್ದ ಒತ್ತಡ ಹಾಗೂ ಅಗತ್ಯಗಳ ನಡುವೆಯೂ ಅವರು ಮರಗೆತ್ತನೆಯ ಬಗೆಗಿನ ಪ್ರೀತಿಯನ್ನು ಉಳಿಸಿಕೊಂಡು ಮುನ್ನಡೆದದ್ದು ಅವರ ಮಹತ್ವಾಕಾಂಕ್ಷಿ ಮನೋಪ್ರವೃತ್ತಿಯನ್ನು ಬಿಂಬಿಸುತ್ತದೆ. ತಮ್ಮ ಅಭಿವ್ಯಕ್ತಿಗೆ ಮಾಧ್ಯಮವಾಗಿ ಬಳಸುತ್ತಿದ್ದ ಪ್ರಾರಂಭದ ಮೃದು ಪ್ರಕಾರದ ಮರಕ್ಕೆ (ಕಾಷ್ಠ) ಬದಲಾಗಿ ಗಟ್ಟಿಯಾದ ಮರಗಳನ್ನು ತಮ್ಮ ಶಿಲ್ಪಗಳಿಗಾಗಿ ಪ್ರಯೋಗಿಸತೊಡಗಿದರು. ಮುಂದೆ ಎಂಜಿನಿಯರಿಂಗ್ (ಯಂತ್ರಶಿಲ್ಪ) ಕಾಲೇಜಿಗೆ ಸೇರಿದ ನಂತರದ ದಿನಗಳಲ್ಲಿ ಅವರನ್ನು ಸೈನ್ಯದ ಆಕರ್ಷಣೆ, ತಂದೆಯ ಪ್ರಭಾವಗಳು ಹೆಚ್ಚು ಹೆಚ್ಚು ಕಾಡತೊಡಗಿದವು. ಒಂದು ವಿಶಿಷ್ಟ ರಾತ್ರಿ ಖ್ಯಾತ ಜನರಲ್ ಕೆ. ಎಂ. ಕಾರಿಯಪ್ಪನವರೊಂದಿಗಿನ ಸುದೀರ್ಘ ಮಾತುಕತೆಯ ಸಂದರ್ಭ ಅವರು ಬದುಕಿನ ಬಹುಮುಖ್ಯ ಮಜಲೊಂದನ್ನು ಸ್ಪಷ್ಟವಾಗಿ ಕಂಡುಕೊಳ್ಳುವಂತೆ ಮಾಡಿತು. ಸೈನಿಕ ವೃತ್ತಿಯಲ್ಲಿ ಬ್ರಿಗೇಡಿಯರ್ ಆಗಿದ್ದ ತಂದೆಯವರ ಹಾದಿಯಲ್ಲಿ ಮುನ್ನಡೆಯುವ ಸ್ಪಷ್ಟ ತೀರ್ಮಾನವನ್ನು ಅವರು ತೆಗೆದುಕೊಂಡರು. ಅಂದ ಹಾಗೆ ಕಾರಿಯಪ್ಪನವರು ರಾಜಾರಾಮ್‌ರವರ ಸಂಬಂಧಿಯೂ ಆಗಿದ್ದರು. ತಂದೆಯ ಬದುಕಿನ ಸ್ಫೂರ್ತಿಯ ಜತೆಜತೆಗೇ ಕಾರಿಯಪ್ಪನವರ ಬದುಕಿನ ದೃಷ್ಟಿ ಖ್ಯಾತಿಗಳೂ ಅವರನ್ನು ಸಾಕಷ್ಟು ಪ್ರಭಾವಿಸಿವೆ. ಅವರು 1948ರಲ್ಲಿ ಮಿಲಿಟರಿ ಅಕಾಡೆಮಿಯನ್ನು ಸೇರಿದರು. ಅಲ್ಲಿಯೂ ತಮ್ಮ ಪ್ರವೃತ್ತಿಯಾದ ಮರಗೆತ್ತನೆಯನ್ನು ರಾಜಾರಾಮ್ ಮುಂದುವರೆಸಿದರು. ಮಿಲಿಟರಿ ಅಕೆಡೆಮಿಯ ಹಲವು ಚಟುವಟಿಕೆಗಳಲ್ಲಿ ಪಾಲ್ಗೊಳ್ಳಲಾರಂಭಿಸಿದರು. ಆ ಉತ್ಸಾಹಭರಿತ ಪಾಲ್ಗೊಳ್ಳುವಿಕೆಯ ಕಾರಣಕ್ಕಾಗಿಯೇ ಕಲೆ ಮತ್ತು ಕುಶಲಕಲೆಗಳ ಕ್ಲಬ್‌ನ ಕೇಡೆಟ್ ಅಧ್ಯಕ್ಷರಾಗಿಯೂ ( Cadet President )ಅವರು ಆಯ್ಕೆ ಮಾಡಲ್ಪಟ್ಟರು.

ಕಿರ್ಕೀಯ ಮಿಲಿಟರಿ ಎಂಜಿನಿಯರಿಂಗ್ ಕಾಲೇಜಿನಿಂದ ಪದವಿಯನ್ನು ಪಡೆದರು. ಇದಾದ ನಂತರ ಅವರ ಕಲಾಸೃಷ್ಟಿಯಲ್ಲಿ ಹೆಚ್ಚಿನ ವೇಗ ಕಾಣಿಸಿಕೊಂಡಿತು. ಗಣನೀಯ ಸಂಖ್ಯೆಯಲ್ಲಿ ಶಿಲ್ಪಗಳು ಮೂಡಿಬಂದವು. ಅವುಗಳಲ್ಲಿ ಕೆಲವನ್ನು ಬಾಂಬೆ ಆರ್ಟ್ ಸೊಸೈಟಿಯ ವಾರ್ಷಿಕ ಪ್ರದರ್ಶನವೊಂದಕ್ಕೆ ಕಳುಹಿಸಿದರು; ಬಹುಮಾನಕ್ಕೂ ಪಾತ್ರರಾದರು ! ಕ್ರಿಡಾ ಚಟುವಟಿಕೆಗಳಲ್ಲಿಯೂ ರಾಜಾರಾವಮ್‌ರವರು ಭಾಗವಹಿಸುತ್ತಿದ್ದರು. ತಮ್ಮ ಅಕೆಡೆಮಿಯ ತಂಡವನ್ನು ಹಲವು ಪಂದ್ಯಗಳಲ್ಲಿ ಪ್ರತಿನಿಧಿಸಿ ಟೆನಿಸ್ ಹಾಗೂ ಅಥ್ಲೆಟಿಕ್ಸ್‌ನಲ್ಲಿ 'ಬ್ಲೂ' ಗೌರವವನ್ನು ತಮ್ಮದಾಗಿಸಿಕೊಂಡರು. ಮಹತ್ವಾಕಾಂಕ್ಷೆಯ ರಾಜಾರಾಮ್ ಸೈನಿಕನಾಗಿರಲು ಆಶಿಸಿದ್ದವರು. ದಿನಗಳು ಉರುಳಿದಂತೆ ಸೈನಿಕ ಎಂಜಿನಿಯರ್ ಕೆಲಸದಲ್ಲಿ ಸಂತೃಪ್ತರಾಗದೆ ಪ್ಯಾರಾಟ್ರೂಪರ್‌ಸ

ತಂಡಕ್ಕೆ ಸೇರಿಕೊಂಡ ನಂತರ ತಮ್ಮ ಕಲೆಯ ಪ್ರವೃತ್ತಿಗಿಂತ ವೃತ್ತಿಗೇ ಪ್ರಾಮುಖ್ಯತೆ ನೀಡಿದರು. ಕಲಾಸೃಷ್ಟಿಗೆ ಮೊದಲಿನಂತೆ ಸಮಯ ನೀಡುವುದು ಅವರಿಂದ ಸಾಧ್ಯವಾಗಲಿಲ್ಲ. ಆದರೂ ಸಮಯ ಸಿಕ್ಕಾಗ ಶಿಲ್ಪ ಸೃಷ್ಟಿಯಲ್ಲಿ ತೊಡಗಿಕೊಳ್ಳುತ್ತಿದ್ದರು. ಕೆಲವು ಶಿಲ್ಪಗಳನ್ನು ಬಾಂಬೆ ಆರ್ಟ್ ಸೊಸೈಟಿ ಹಾಗೂ ಅಖಿಲಭಾರತ ಶಿಲ್ಪಿಗಳ ಸಂಘದ ಪ್ರದರ್ಶನಗಳಿಗೆ ಕಳುಹಿಸುತ್ತಿದ್ದರು.

ರಾಜಾರಾಮ್‌ರವರ ಶಿಲ್ಪಸೃಷ್ಟಿಯಲ್ಲಿ ತೀವ್ರತೆ, ವೇಗವನ್ನು ನಾವು ಕಾಣುವುದು 1956ರಲ್ಲಿ. ಆ ಸಂದರ್ಭದಲ್ಲಿ ಪುಣೆಯ ಸೈನಿಕ ಎಂಜಿನಿಯರಿಂಗ್ ಕಾಲೇಜಿನಲ್ಲಿ ಕಲಿಸುತ್ತಿದ್ದ ವೃತ್ತಿಯ ನಡುವೆ ತಮ್ಮ ಪ್ರವೃತ್ತಿಯ ಒತ್ತಡಕ್ಕೆ ಒಳಗಾಗಿ ಗಣನೀಯ ಶಿಲ್ಪಗಳನ್ನು ಸೃಷ್ಟಿಸಿದರು. ಆಗಲೇ ಸಂಪ್ರದಾಯ ಹಾದಿಯನ್ನು ಬಿಟ್ಟು ಹೊಸದೃಷ್ಟಿಯ ತಂತ್ರಗಳನ್ನು ಅಳವಡಿಸಿಕೊಂಡು ಶಿಲ್ಪಿ ಸೃಷ್ಟಿಯಲ್ಲಿ ತೊಡಗಿದರು. ಆ ವರ್ಷ ಸೃಷ್ಟಿಯಾದ 8 ಶಿಲ್ಪಗಳೂ ಕಲಾಸಂಗ್ರಹಕಾರ ಅಲ್ಲದೆ ವಿಮರ್ಶಕರಿಂದಲೂ ವಿಶಿಷ್ಟವೆಂದು ಗುರುತಿಸಲ್ಪಟ್ಟವು. ರಾಜಾರಾಮ್ ಮಹತ್ವಾ ಕಾಂಕ್ಷೆಯ ಒತ್ತಡಕ್ಕೆ ಒಳಗಾದವರಂತೆ ಬಿಡುವಿಲ್ಲದೆ ತಮ್ಮ ಶಿಲ್ಪಸೃಷ್ಟಿಯ ಕುರಿತು ಚಿಂತಿಸತೊಡಗಿದರು; ಅತೃಪ್ತಿ ಅವರನ್ನು ಕಾಡಿತು. ತಮ್ಮ ಸೃಷ್ಟಿಯಲ್ಲಿ ಹೊಸ ಆಯಾಮಗಳನ್ನು ಕಸಿ ಮಾಡಿಕೊಳ್ಳಲು ಚಡಪಡಿಸಿದ ಅವರು ಅನುಭವಕ್ಕಿಂತಲೂ ರೂಪವೇ ಮುಖ್ಯವೆಂದು ನಂಬಿದ್ದ ಸಂದರ್ಭದಲ್ಲಿದ್ದವರು.

ನಮ್ಮಲ್ಲಿ ಪುರಾಣಗಳ ಸಂದರ್ಭಗಳನ್ನು ಚಿತ್ರಿಸಿದ, ಆ ಮೂಲಕ ಮಾನ್ಯರಾದ ಕಲಾವಿದರ ಕಲೆಯ ಪರಂಪರೆ ಆಗಲೂ ಬಹುತೇಕ ಮುಂದುವರಿದಿತ್ತು. ಕರ್ನಾಟಕವೇ ಅಲ್ಲದೆ ಇಡೀ ಭಾರತದ ಜನಪ್ರಿಯ ಕಲಾಸಂಪ್ರದಾಯವೂ ಅದೇ ಆಗಿತ್ತು. ಮೈಸೂರಿನ ಕಲಾಶಾಲೆ, ಅರಮನೆಗಳ ಸಂಪರ್ಕದ ಕಲೆ ಇಲ್ಲಿ ನೆನಪಾಗುತ್ತದೆ. ಆದರೆ ಮುಂಬಯಿಯ ಸಂದರ್ಭ ಸ್ವಲ್ಪ ವಿಭಿನ್ನ. ಮುಂಬಯಿ ಹಾಗೂ ದೆಹಲಿಗಳ ಸಮಕಾಲೀನ ಕಲಾಚಳುವಳಿಯ ಕಲಾವಿದರ ಪರಿಚಯ, ಸ್ವಲ್ಪ ಮಟ್ಟಿನ ಸಂಪರ್ಕವೂ ರಾಜಾರಾಮ್ ರವರಿಗಿದ್ದಿತು. ಅವರಿಂದ ಸ್ಫೂರ್ತಿಗೊಂಡಂತೆ ತಮ್ಮ ಶಿಲ್ಪಗಳು ಅಪೂರ್ವ ವಾಗಿರಬೇಕೆಂಬ ಆಶಯದಿಂದ ವಿಶ್ವಕಲಾ ಇತಿಹಾಸವೇ ಅಲ್ಲದೆ ಯೂರೋಪಿನ ಕಲಾಸೃಷ್ಟಿಯ ಅಧ್ಯಯನವನ್ನೂ ಮಾಡುವ ಉದ್ದೇಶದಿಂದ 1957ರಲ್ಲಿ 2 ತಿಂಗಳ ರಜೆ ಪಡೆದು ಯೂರೋಪಿನ ಪ್ರಯಾಣ ಕೈಗೊಂಡರು. ಇಂಗ್ಲೆಂಡ್, ಸ್ಕಾಟ್‌ಲ್ಯಾಂಡ್, ಬೆಲ್ಜಿಯಂ, ಜರ್ಮನಿ, ಸ್ವಿಟ್ಜರ್‌ಲ್ಯಾಂಡ್, ಮತ್ತು ಇಟಲಿಗಳಿಗೆ ಭೇಟಿ ನೀಡಿದರು.

1957ರ ಸೆಪ್ಟಂಬರ್‌ನಲ್ಲಿ ತಾಯ್ನಾಡಿಗೆ ಹಿಂತಿರುಗಿದ ಅವರಲ್ಲಿ ಅಪೂರ್ವ ಚೇತನವಿತ್ತು. ವಿಶ್ವಕಲಾ ಇತಿಹಾಸದ ಅಸಾಮಾನ್ಯ ಶಿಲ್ಪಿಗಳ ವಿಖ್ಯಾತ ಶಿಲ್ಪಗಳನ್ನು ಅವರು, ನೋಡಿ, ಅನುಭವಿಸಿ ಬಂದಿದ್ದರು. ಹೆನ್ರಿಮೂರ್, ಡೇಗಾಸ್, ಬರ್‌ಬಾರಾ ಹೆಪ್‌ವೋರ್ತ್, ಅಲೆಕ್ಸಾಂಡರ್ ಕಾಲ್ಡರ್ ಮೊದಲಾದವರ ಶಿಲ್ಪಗಳು, ರಾಜಾರಾಮ್‌ರವರ ಮನಸ್ಸು ಕಣ್ಣುಗಳೆರಡನ್ನೂ ಉತ್ತಮವಾಗಿ ಹದಮಾಡಿದ್ದವು. ಹೊಸತನದ ಶಿಲ್ಪ ಸೃಷ್ಟಿಯಲ್ಲಿ ತಲ್ಲೀನರಾದರು. ಹೀಗೆ ಅದಮ್ಯ ಚೇತನ, ಶ್ರಮಗಳಿಂದ ಸೃಷ್ಟಿಸಿದ ಶಿಲ್ಪಗಳು 1958ರ ಡಿಸೆಂಬರ್‌ನಲ್ಲಿ ದೆಹಲಿಯಲ್ಲಿ ಪ್ರದರ್ಶಿಸಲ್ಪಟ್ಟವು. ದೆಹಲಿಯಲ್ಲಿ ಅವರ ಮೊದಲ ಒನ್ ಮ್ಯಾನ್ ಷೋ ಅದು. ಈ ಪ್ರದರ್ಶನ ರಾಜಾರಾಮ್‌ರವರಿಗೆ ಸಾಕಷ್ಟು ಸಂತೃಪ್ತಿ ನೀಡಿತು. 1959ರಲ್ಲಿ ಮತ್ತೊಂದು ಪ್ರದರ್ಶನವನ್ನು ಮುಂಬಯಿಯಲ್ಲಿಯೂ ವ್ಯವಸ್ಥೆ ಮಾಡಿದರು. ಹೀಗಾಗಿ ಆ ಸಂದರ್ಭದ ಬಹುಮುಖ್ಯ ಶಿಲ್ಪಿಗಳೆಲ್ಲರ ಪರಿಚಯ ರಾಜಾರಾಮ್‌ರವರಿಗೆ ಆಯಿತು. ಇತರರಿಗೂ ರಾಜಾರಾಮ್‌ರವರ ಪರಿಚಯ ಆಯಿತು. ಅಂದಿನ ಭಾರತೀಯ ಸಂದರ್ಭದ ಆಧುನಿಕ ಶಿಲ್ಪಕಲೆಯ ಬಹುಮುಖ್ಯ ಶಿಲ್ಪಿಗಳಲ್ಲಿ ರಾಜಾರಾಮ್‌ರವರೂ ಒಬ್ಬರಾಗಿ ಗುರುತಿಸಲ್ಪಟ್ಟರು. ಕನ್ನಡ ಪ್ರತಿಭೆಗೆ ಸಂದ ಗೌರವ ಅದು.

1959ರ ನವಂಬರ್‌ನಲ್ಲಿ ಜಪಾನ್‌ಗೆ ಭೇಟಿ ನೀಡಿದ ರಾಜಾರಾಮ್ 'ಅಲ್ಲಿನ ಅನುಭವವೇ ವಿಶಿಷ್ಟ ಎಂದು ದಾಖಲಿಸಿದ್ದಾರೆ. 'ಜಪಾನೀಯರ ಚಿಂತನಾ ಕ್ರಮ ತಮ್ಮದೇ ಆದಂತಿದೆ' ಎಂದೂ ಅವರು ಮಿತ್ರರಲ್ಲಿ ಹೇಳಿಕೊಂಡಿದ್ದಾರೆ. ಅಲ್ಲಿ ಒಂದೆರಡು ಪ್ರದರ್ಶನಗಳನ್ನೂ ವ್ಯವಸ್ಥೆ ಮಾಡಿದರು. ಅಲ್ಲಿಂದ ಹಿಂತಿರುಗಿದ ನಂತರ ತಮ್ಮ ವೃತ್ತಿಯ ಬಿಡುವಿಲ್ಲದ ಕಾರ್ಯಗಳಲ್ಲಿ ತಲ್ಲೀನರಾಗಬೇಕಾಯಿತು. ಅವರನ್ನು NEFAಗೆ ಕಳುಹಿಸಲಾಯಿತು. ಚೀನಾಕಡೆಯಿಂದ ಆಕ್ರಮಣವಾದರೆ ತಡೆಯುವ ಉದ್ದೇಶದಿಂದ ಆ ಭಾಗದಲ್ಲಿ ನಮ್ಮ ಸೈನ್ಯ ಮುನ್ನಡೆಯಲು ರಸ್ತೆಗಳು ನಿರ್ಮಾಣದ ಕೆಲಸವನ್ನು ಅವರು ನಿರ್ವಹಿಸ ಬೇಕಾಯಿತು. ಅದಾದ ನಂತರ ಮೇಜರ್ ರಾಜಾರಾಮ್ ಲಡಾಖ್‌ಗೆ ಹೋದರು. ಅಲ್ಲಿ ಅಕಾಲ ಮರಣವನ್ನು (8.6.1961) ಅಪ್ಪಿದರು. ಅವರ ದುರಂತಮಯ ಸಾವಿನ ಕಾರಣ ಭಾರತೀಯ ದೃಶ್ಯ ಕಲಾರಂಗವು ಹೊಂದಬಹುದಾಗಿದ್ದ ಹಲವು ಹೊಸ ಆಯಾಮಗಳಿಂದ ವಂಚಿಸಲ್ಪಟ್ಟಿತು.

ಬಾಲ್ಯದಲ್ಲಿಯೇ ಒಣಮರದ ಕೊರಡುಗಳನ್ನು ಮಾಧ್ಯಮವಾಗಿ ಬಳಸಿ ಅಭಿವ್ಯಕ್ತಿಸುತ್ತಿದ್ದ ರಾಜಾರಾಮ್ ನಂತರದ ದಿನಗಳಲ್ಲಿ ದೃಶ್ಯ ಸಂದರ್ಭಗಳನ್ನು

ಗ್ರಹಿಸುವಲ್ಲಿ, ಹೊಸದೃಷ್ಟಿಯನ್ನು ಹೊಂದುವಲ್ಲಿ ಯಶಸ್ವಿಯಾದರು. ಸಹಜ ರೂಪಗಳಿಂದ ವಿಭಿನ್ನವಾದ 'ವಿಕೃತಿ' ಸೌಂದರ್ಯವನ್ನು ದುಡಿಸಿಕೊಂಡರು. ಕೊಡಗಿನ ಮೂಲದ ಅವರಿಗೆ ಬೇರೆಲ್ಲ ಮಾಧ್ಯಮಗಳಿಗಿಂತಲೂ ಮರದ ಕೊರಡುಗಳು ಹೆಚ್ಚು ಸುಲಭವಾಗಿ ದೊರೆಯುತ್ತಿದ್ದವು. ಬದುಕನ್ನೆಲ್ಲ ಹಸಿರು ಪ್ರಕೃತಿಯ ನಡುವೆ ಹುಡುಕಿಕೊಳ್ಳುವ ಸಂದರ್ಭ. ಈ ಎಲ್ಲ ಕಾರಣಗಳೇ ಅಲ್ಲದೆ ಇನ್ನೂ ಹಲವು ಕಾರಣಗಳಿಂದ ಆ ಮಾಧ್ಯಮವನ್ನು ರಾಜಾರಾಮ್ ಆರಿಸಿಕೊಂಡದ್ದು ಸಹಜವಾಗಿಯೇ ಇದೆ. ಅವರೇ ತಮ್ಮ ದಿನಚರಿಯಲ್ಲಿ ಹೇಳಿಕೊಂಡಿರುವಂತೆ, "From my youngest days, I have always worked on wood. The beauty of wood is in its shape, its irregular grain, colour and texture. In the grain of wood one can imagine a picture and its shape a movement common in every day life. Wood is warm and has a life, whether in its dry or Green state. Forme wood is very easily available, and in India a large supply is available of very different types. Wood has all the primary colours which gives the sulpture life. Being a soldier who is transferred from place to place every two years, it is the easiest material to handle and carry about, and its storage is not very difficult. The tools required for it are light and few." ಎಂಬ ಮಾತುಗಳಲ್ಲಿ ಆ ಮಾಧ್ಯಮದ ಆಯ್ಕೆಯ ಅನಿವಾರ್ಯತೆಯನ್ನು ಆಕರ್ಷಕವಾಗಿ ದಾಖಲಿಸಿದ್ದಾರೆ. ಪ್ರಕೃತಿಯನ್ನು ತಮ್ಮ ಅಭಿವ್ಯಕ್ತಿಯ ಮೂಲ ಧ್ವನಿಯನ್ನಾಗಿಸಿಕೊಂಡಿದ್ದ ರಾಜಾರಾಮ್ ಸಹಜವಾಗಿ ದೊರೆಯುವ ಒಣಮರಗಳ ಹೊರರೂಪ ಹಾಗೂ ಮೈವಳಿಕೆ (texture) ಗಳಲ್ಲಿ ತಮ್ಮ ರೂಪಗಳನ್ನು ಹುಡುಕಿಕೊಳ್ಳುತ್ತಿದ್ದರು. ಮೂಲಸಾಮಾಗ್ರಿ (material) ಹಾಗೂ ಮಾಧ್ಯಮ ಪರಿಕರ (medium)ಗಳನ್ನು ಅಲ್ಪಸ್ವಲ್ಪ ಬದಲಾವಣೆ ಮಾಡಿ, ದುಡಿಸಿ ಕೊಳ್ಳುತ್ತಿದ್ದರು. ಹೀಗಾಗಿಯೇ, 'ಒಂದು ಮಾಧ್ಯಮವನ್ನು ಅದರ ಎಲ್ಲ ಸಹಜ ಗುಣಲಕ್ಷಣ ವೈವಿಧ್ಯತೆಗಳೊಂದಿಗೆ ದುಡಿಸಿಕೊಳ್ಳುವುದು ಅಗತ್ಯ' ಎಂಬ ಹೆನ್ರಿಮೂರ್ [1] ಮಾತುಗಳನ್ನು ಅನುಸರಿಸಿದ ಅವರು "My sculpture is more for feeling of the twist and turn found in form, grain or texture, in other words modifying nature to my purposes" ಮುಂಬಯಿಯ



ತಾಯಿ ಮತ್ತು ಮಗು



ನಿಂತಿರುವ ವ್ಯಕ್ತಿ



ಬುಡಕಟ್ಟು ಸ್ತ್ರೀ

ಕಾರ್ಯಾಗಾರವೊಂದರಲ್ಲಿ ಸ್ವಲ್ಪಕಾಲ ಕಲಾಸೃಷ್ಟಿಯಲ್ಲಿ ತೊಡಗಿಕೊಂಡದ್ದು ಈ ದೃಷ್ಟಿಗೆ ಸಾಕಷ್ಟು ಕೊಡುಗೆ ನೀಡಿದೆ. ಅಲ್ಲಿ ಹಲವು ತಂತ್ರಗಳನ್ನು ಹಾಗೂ ಮಾಧ್ಯಮವೊಂದನ್ನು ದುಡಿಸಿಕೊಳ್ಳುವಾಗ ಆ ಮಾಧ್ಯಮವನ್ನು ಅಭಿವ್ಯಕ್ತಿಗೆ ಪೂರಕವಾಗಿ ಹೇಗೆ ಬಳಸಿಕೊಳ್ಳಬೇಕು? ಎಂಬ ಅಂಶಗಳನ್ನು ತಿಳಿದಿರಬಹುದಾದ ಸಾಧ್ಯತೆಗಳಿವೆ.

1957ರಲ್ಲಿ ರಾಜಾರಾಮ್ ಸೃಷ್ಟಿಸಿದ 'ತಾಯಿ ಮತ್ತು ಮಗು' ಶಿಲ್ಪದಲ್ಲಿ ಒಣಮರದ ಕೊರಡನ್ನು ಅದರ ಮೈಲ್ಮೈ ಮೈವಳಿಕೆಯನ್ನು ತಮ್ಮ ಆಶಯಕ್ಕೆ ಪೂರಕವಾಗಿ ಬಳಸಿಕೊಂಡಿದ್ದಾರೆ. ಕೆಲವೆಡೆ ಒರಟು ಮೈವಳಿಕೆಯನ್ನು ನಯಗೊಳಿಸಿಯೂ ಇದ್ದಾರೆ. ಮರದ ಬೊಡ್ಡೆಯ ಒಳನೆಯ್ಗೆಯ ಪದರಗಳ ರೇಖಾ ಮೈವಳಿಕೆಗಳು ಆ ಶಿಲ್ಪದ ರೂಪಕಲ್ಪನೆಗೆ ಆಳವನ್ನು ನೀಡಿವೆ. ಪ್ರಕೃತಿ ಸಹಜ ಅಂಕುಡೊಂಕಾದ ಮೈಲ್ಮೈನ ಏರಿಳಿತಗಳನ್ನು ತಮ್ಮ ರೂಪದ ಲಯಕ್ಕೆ ನೆರವಾಗಿಸಿಕೊಂಡಿದ್ದಾರೆ. ಮರದ ಬೊಡ್ಡೆಯ ಸಹಜ ಬೇರುಗಳನ್ನು ಕೆಲವೊಮ್ಮೆ ನಯಗೊಳಿಸಿ, ಹೊಳಪು ನೀಡಿಯೂ ದುಡಿಸಿಕೊಂಡಿದ್ದಾರೆ. 'ಜಪಾನಿ ನರ್ತಕಿ' ಶಿಲ್ಪವನ್ನು ಇಲ್ಲಿ ಹೆಸರಿಸಬಹುದು. 'ಹೆಡ್' ಶೀರ್ಷಿಕೆಯ ಶಿಲ್ಪದಲ್ಲಿ ಆದಿಮ ಸತ್ವದ ಆಧುನಿಕತೆಯಿದೆ; ವಿಕೃತಿ ಸೌಂದರ್ಯದ ವಿಶಿಷ್ಟ ಅನುಭವ ನೀಡುತ್ತದೆ. ನೆಲದಿಂದ ನೇರವಾಗಿ ಸಂಗ್ರಹಿಸಿದ ಬೇರುಗಳಲ್ಲಿ ರಾಜಾರಾಮ್, 'ಬುಡಕಟ್ಟಿನ ಹೆಣ್ಣು' ಮತ್ತು 'ಬೆಸ್ತರ ಹುಡುಗಿ' ರೂಪಗಳನ್ನು ಗ್ರಹಿಸಿರುವ ರೀತಿ ಸುಂದರ. 'ನಿರೀಕ್ಷೆ' ಶೀರ್ಷಿಕೆಯ ಕುಳಿತ ಭಂಗಿಯಲ್ಲಿ ತಲ್ಲೀನತೆಯಿದೆ.

ಮರಗೆತ್ತನೆಯ ಸಲಕರಣೆಗಳ ಮೂಲಕ ಉಂಟುಮಾಡಿರುವ ಮೈವಳಿಕೆಗಳು 'ಅಜ್ಞಾತ' ಶೀರ್ಷಿಕೆಯ ಶಿಲ್ಪದಲ್ಲಿ ಕಾಣಿಸಿಕೊಂಡಿರುವ ರೀತಿಯಲ್ಲಿ ಗಾಂಭೀರ್ಯವಿದೆ. ಈ ಶಿಲ್ಪವನ್ನು ಹೊಳಪಾಗಿಸಿಲ್ಲ. 'Secret', ಶೀರ್ಷಿಕೆಯ ಶಿಲ್ಪದಲ್ಲಿ ಮೈಮೇಲೆ ಬಿದ್ದು ಗುಟ್ಟಾಗಿ ಪಿಸುಗುಟ್ಟುತ್ತಿರುವ ರೀತಿಯ ರೂಪಗಳ ಅಭಿವ್ಯಕ್ತಿಯಲ್ಲಿ ತೀವ್ರತೆಯಿದೆ. ಕೆಲವು ಸಿಲ್ಪಗಳ ನಡುವೆ ರಂಧ್ರಗಳಿದ್ದು ಹೆನ್ರಿಮೂರ್ ಶಿಲ್ಪ ಸೃಷ್ಟಿಯ ಬೆಡಗನ್ನು ನೆನಪಿಸುತ್ತವೆ. ಅಂದ ಹಾಗೆ ರಾಜಾರಾಮ್‌ರವರ ಕಲ್ಪನೆಯಲ್ಲಿ 'ತಾಯಿ ಮತ್ತು ಮಗು' ಶಿಲ್ಪವೂ ಮೂಡಿಬಂದಿದೆ. 'Drem,' 'Tribal Woman' ಶಿಲ್ಪಗಳೂ ಗಣನೀಯ ತೀವ್ರತೆಯಿಂದ ಗ್ರಹಿಸಲ್ಪಟ್ಟಿವೆ. 'ಟಾರ್ಸೋ' ವಿಶಿಷ್ಟ ಸೌಂದರ್ಯವನ್ನು ಅರಗಿಸಿಕೊಂಡಿದೆ. ಮರದ ಒರಟುತನವನ್ನು 'ನೆಗೆತ' ಶಿಲ್ಪ ದುಡಿಸಿಕೊಂಡಿದೆ. ವಿಕೃತಿ ಸೌಂದರ್ಯದಿಂದ 'Man with load', ಗಣನೀಯವಾಗಿದೆ.

ಆ ಸಂದರ್ಭದ ಆಧುನಿಕ ಪ್ರಜ್ಞೆ ಹಾಗೂ ಪರಿಸರಗಳಿಗೆ ಹೊಂದುವ ಅಭಿವ್ಯಕ್ತಿ ಇವಾದರೂ ಅಂದಿನ ನಮ್ಮ ರಾಜ್ಯದ ಸಂಪ್ರದಾಯ ಶೈಲಿಯ ಸೃಷ್ಟಿಗಳ ನಡುವೆ ರಾಜಾರಾಮ್‌ರವರ ಶಿಲ್ಪಗಳು ಆಧುನಿಕ ಪ್ರಜ್ಞೆಯನ್ನು ಅರಗಿಸಿಕೊಂಡ ಬಗೆ ಕೌತುಕವನ್ನು ಉಂಟುಮಾಡುತ್ತವೆ. ಆದರೆ ಮುಂಬಯಿ, ದೆಹಲಿಗಳ ಕಲಾವಲಯದ ಸಂಪರ್ಕ ಅವರ ಈ ಬೆಳವಣಿಗೆಗಳಿಗೆ ನೆರವಾಗಿದೆ. ಇಂದಿನ 'Selling Nations; International Exhibitions and Cultural Diplomacy' [2]ಹಾಗೂ 'ಕಲೆ ಮತ್ತು ಹಣ' ಗಳ ಭೂತಾಕಾರದ ಬೆಳವಣಿಗೆಗಳಿಲ್ಲದ ಅಂದಿನ ದಿನಗಳಲ್ಲೂ ಹೊರಗಿನ ಕಲೆ ಕಲಾವಿದರ ಪ್ರಭಾವ ನಮ್ಮವರ ಮೇಲೆ ಹಲವು ರೀತಿಗಳಲ್ಲಿ ಆಗಿತ್ತು.

ಮುಂಬಯಿಯ Progressive Artist Group,[3] ತನ್ನ ಹೊಸದೃಷ್ಟಿ ಕೋನದ ಗ್ರಹಿಕೆಗಳ ಅಭಿವ್ಯಕ್ತಿಯಿಂದ ಭಾರತೀಯ ಕಲಾರಂಗದಲ್ಲಿ ಹೊಸಧ್ವನಿಯನ್ನು ಕೇಳಿಸಿದ ದಶಕದ ನಂತರದಲ್ಲಿ ಕಾಣಿಸಿಕೊಂಡಿದ್ದವರು ರಾಜಾರಾಮ್[4]. ಆ ಹಿಂದಿನ ಆನಂದ ಕುಮಾರ್‌ಸ್ವಾಮಿ, ಹಾಗೂ ಬಂಗಾಳದ ಕಲಾವಿದರ ಭಾರತೀಯ ಕಲೆಯ ಪುನರುಜ್ಜೀವನದಂತಹ ಚಿಂತನೆಯ ಬೆಳವಣಿಗೆಗಳು ರಾಜಾರಾಮ್‌ರವರನ್ನು ಪ್ರಭಾವಿಸಿಲ್ಲ.

ಅವಕಾಶ (space) ದೊಂದಿಗೆ ಆಟವಾಡುವ, ಮುಖಾಮುಖಿಗೆ ತೊಡಗುವ ರಾಜಾರಾಮ್‌ರ ಶಿಲ್ಪ ಗಳು ಇಂದಿಗೂ ಪ್ರಸ್ತುತವಾಗುವ ಅಂಶಗಳನ್ನು ಅರಗಿಸಿಕೊಂಡಿವೆ. ಅವರು ಲೋಹದ ಶಿಲ್ಪಗಳನ್ನು ಸೃಷ್ಟಿಸಿದ್ದಾರಾದರೂ ಅವುಗಳನ್ನು ದೊಡ್ಡ ರೀತಿಯಲ್ಲಿ ಅವರ ಮರದ ಶಿಲ್ಪಗಳಂತೆ ಪ್ರದರ್ಶಿಸಲಾಗಿಲ್ಲ.

ಅಲ್ಯೂಮಿನಿಯಂ ಮಾಧ್ಯಮದ ' Drummer ' ಶಿಲ್ಪ ಸಂಗೀತದ ಲಯವನ್ನು ಹೊಂದಿಸಿಕೊಂಡಂತೆ ಆಧುನಿಕತೆಯ ರೂಪದಲ್ಲಿ ಗ್ರಹಿಸಲ್ಪಟ್ಟಿದೆ. ಅವರು ಕಂಡ, ಪ್ರೀತಿಯ ಅನುಭವವನ್ನು ಗ್ರಹಿಸಿದ ಹಲವು ಜನರ ಒಳ ಹಾಗೂ ಹೊರನೋಟಗಳನ್ನು ಬಹುತೇಕ ಶಿಲ್ಪಗಳಲ್ಲಿ ಬಿಂಬಿಸಿದ್ದಾರೆ. ಇಲ್ಲಿ ಪ್ರಾರಂಭದ ಅಲಂಕರಣ ಮೀರಿ ಅಭಿವ್ಯಕ್ತಿಸಿದ್ದಾರೆ. ಅವರು ಕಂಡು, ಕೇಳಿದ ಶಿಲ್ಪಿಗಳನ್ನು, ಅವರ ಶಿಲ್ಪಗಳನ್ನು ಅಧ್ಯಯನ ಮಾಡಿ 'ಪ್ರಭಾವದ ಆತಂಕ' ದಿಂದ ಸೃಷ್ಟಿಸಿದ್ದಾರೆ.

ವಿಖ್ಯಾತ ದಂತಕತೆ ಹಾಲಿವುಡ್ ನಟಿ ಮರ್ಲಿನ್ ಮನ್ರೋ (1916-62) ಸೌಂದರ್ಯಕ್ಕೆ ಮರುಳಾಗದವರಾರು ? ಕಲಾವಿದರೂ ಈ ಪಟ್ಟಿಯಲ್ಲಿದ್ದಾರೆ.

ಪಾಪ್‌ಕಲೆಯ ಆಂಡಿ ವಾರ್ಹೋಲ್ (1930-87) ಮರ್ಲಿನ್‌ಳ ವಿಶ್ವಾತ್ಮಕ ಸೌಂದರ್ಯವನ್ನು ತನ್ನ ಕಲೆಯಲ್ಲಿ ಸಾಮಾನ್ಯರಿಗೂ ಎಟುಕುವಂತೆ ತಂದು ಕೊಂಡಿರುವುದುಂಟು. ಇದಕ್ಕೂ ಮೊದಲೇ ರಾಜಾರಾಮ್ ತಮ್ಮ ಸ್ವ-ಅಧ್ಯಯನದ ಫಲವೆಂಬಂತೆ, ಕರಗತವಾಗಿದ್ದ ಕುಶಲತೆ, ಚತುರತೆಗಳೊಂದಿಗೆ ರೋಡಿನ್ ಶಿಲ್ಪಗಳ ಅಧ್ಯಯನ ಹಾಗೂ ಮರ್ಲಿನ್ ಮನ್ರೋಳ ಛಾಯಾಚಿತ್ರಗಳ ಅಧ್ಯಯನಗಳನ್ನು ಸಮೀಕರಿಸಿ, ನೈಜಶೈಲಿಯಲ್ಲಿ ಅನಾಟಮಿಯಲ್ಲಿ ಅರಗಿಸಿಕೊಂಡು ಆ ನಟಿಯ ನಗ್ನ ರೂಪಗಳನ್ನು ಮರದ ಮಾಧ್ಯಮದಲ್ಲಿ ಗ್ರಹಿಸಿರುವ ರೀತಿ ಅಚ್ಚರಿಯನ್ನು ಉಂಟುಮಾಡುತ್ತದೆ. ಕುಳಿತಭಂಗಿಯ ಮರ್ಲಿನ್‌ಳ ಕಾವ್ಯಮಯ ದೇಹದ ಶಿಲ್ಪವೇ ಅಲ್ಲದೆ ತುದಿಗಾಲಲ್ಲಿ ನಿಂತು ತನ್ನೆಲ್ಲವನ್ನು ತೋರುತ್ತಿರುವ ಚಿಕ್ಕ ಆಕಾರದ ಮರದ ಈ ಶಿಲ್ಪಗಳು ರಾಜಾರಾಮ್‌ರವರ ಮಹತ್ವಾಕಾಂಕ್ಷೆಯ ಆಕರ್ಷಕ ಮುನ್ನುಡಿಯಂತಿವೆ.

ರಾಜಾರಾಮ್‌ರವರು ಅಲೆಕ್ಸಾಂಡರ್ ಕಾಲ್ಡರ್‌ನ 1920ರ ದಶಕದ ಮರದ ಶಿಲ್ಪಗಳಿಂದಲೂ ಪ್ರಭಾವಗೊಂಡಂತೆ ಕೆಲವು ಶಿಲ್ಪಗಳಲ್ಲಿ ಕಾಣುತ್ತಾರೆ.[5]

ರಾಜಾರಾಮ್‌ರವರ ಶಿಲ್ಪಗಳು ಅಂದಿನ ಸಂದರ್ಭದ ಭಾರತೀಯ ಕಲಾಬರಹಗಾರರನ್ನೆಲ್ಲ ಆಕರ್ಷಿಸಿದ್ದವು. ಆರ್.ಎಲ್. ಬಾರ್ಥೋಲೋಮಿಯೊ 'He understood form and he respected grain. He accepted chance discoveries but only on the path of his search for the answer. As such he never took from nature-whatever suggested a work of art; he gave his art the emphasis of nature. He new how light would surround and line within his sculpture. He loved the surface and he loved the soul. Sculpture he knew had to have a drift and a direction; but it also had to have a dynamic determination. Its body had to cut the air as a shape; but its action had to generate from the centre. It had to have a mood and not be just a resemblance to nature. It had to be nature and its nature was to be nude. Rhythm, of course was a prerequisite. But there had to be a kind of hymn, and that hymn had to be a hymn of man. So he gave to wood all that

was the wood's memory of man." ಎಂದು ಬರೆದಿದ್ದಾರೆ. ರಾಜಾರಾಮ್‌ರವರ ಕೃತಿಗಳಲ್ಲಿ ಮಾನವೀಯ ಭಾವಗಳ ಸೌಂದರ್ಯವಿದೆ. ' Violence and muscular articulation are conspicous by their absence in the art of Rajaram' ಎನ್ನುವ ಮುಲ್ಕರಾಜ ಆನಂದ ಅವರು 'This is a remarkable quality in one so young ' ಎಂಬ ಸಂಭ್ರಮವನ್ನೂ ವ್ಯಕ್ತಪಡಿಸುತ್ತಾರೆ.

ರಿಚರ್ಡ್ ಬಾರ್ಥೋಲೋಮಿಯಾರವರ ಆಶ್ರಯದ ಕುನಿಕಾ ಕಲಾಕೇಂದ್ರದಲ್ಲಿ ಒಮ್ಮೆ ರಾಜಾರಾಮ್‌ರವರ ಶಿಲ್ಪಗಳ ಪ್ರದರ್ಶನದಿಂದ ಆ ಋತುವಿನ ಕಲಾಚಟುವಟಿಕೆಗಳ ಉದ್ಘಾಟನೆಯಾಗಿತ್ತು. ರಾಜಾರಾಮ್‌ರವರ ಶಿಲ್ಪಗಳ ಸಂಗ್ರಹವನ್ನೂ ಈ ಕೇಂದ್ರ ಹೊಂದಿತ್ತು. ತಮ್ಮ ಶಿಲ್ಪಗಳ ಮಾಧ್ಯಮ, ತಂತ್ರಗಳ ನಿರ್ವಹಣೆಗಳೇ ಅಲ್ಲದೆ ಗ್ರಹಿಕೆಯ ಆಶಯ-ಅಭಿವ್ಯಕ್ತಿಗಳ ಬಗೆಗೂ ರಾಜಾರಾಮ್ ಹೆಚ್ಚಾಗಿ ಮಾತನಾಡುತ್ತಿರಲಿಲ್ಲ. ಕಲಾಕೃತಿಗಳನ್ನು ಮಾರುವ ಆತುರ, ಉದ್ದೇಶಗಳನ್ನು ಅವರು ಹೊಂದಿರಲಿಲ್ಲ. ಹಾಗಾಗಿಯೇ ತಮ್ಮ ಶಿಲ್ಪಗಳನ್ನು ಕುನಿಕಾ ಕಲಾಕೇಂದ್ರವು ನೋಡಿ ಕೊಳ್ಳುವ ವ್ಯವಸ್ಥೆಯನ್ನು ರಾಜಾರಾಮ್ ಮಾಡಿದ್ದರು. ಸ್ವಯಂ ಕಲಿಕೆಯ ರಾಜಾರಾಮ್‌ರವರು ದೆಹಲಿಯಲ್ಲಿ ಪ್ರದರ್ಶಿಸಿದ ತಮ್ಮ ಶಿಲ್ಪಗಳಿಂದ ಅಂದಿನ ಕಲಾಬರಹಗಾರರನ್ನು ಅಚ್ಚರಿಗೊಳಿಸಿದರು. " .......the sudden, almost overnight rise to distinction of capt : C.P. Rajaram is a refreshing revelation of what talents lie dormant in our country......the modern movement in wood sculpture, thus is a new departure, If loves the abstract form because it is more congenial to the nature of the material Rajaram's success can be traced to his most perfect and sensitive understanding of his medium." ಎಂದು ಕೃಷ್ಣಚೈತನ್ಯ ದಾಖಲಿಸಿದರು. ರಾಜಾರಾಮ್‌ರವರು ದಿವಂಗತರಾದ ನಂತರ 12-7-1961ರಂದು ಟೋಕಿಯೋದಿಂದ ಪೊನ್ನಪ್ಪ ರಾಜಾರಾಮ್‌ರವರ ಕುಟುಂಬಕ್ಕೆ ಸತೀಶ್ ಗುಜ್ರಾಲ್ 'I have a rough idea; We should form a memorial fund in the name of Rajaram, the purpose which will be to build a museum of modern art with high standards. the total works of

Rajaram will be placed in one room. This museum will have the best of Indian art today, to start with. I am confident of getting such worksfrom worthy artists as gifts to the museum. We may require about 5 lakhs, to have a suitabla building and other fecilities. I hope to get land from the government as a gift. also hope to get generous contributions from some foreign foundations. To strat with we form a small committee, and you and myself should be the first countributers. I am a poor artist and cannot spare much, but will give Rs 5,000 to start with, and also five of my best paintings, worth twice the above amount,......" ಎಂದು ಬರೆದರು. ಆದರೆ ಪೊನ್ನಪ್ಪನವರ ಶಿಲ್ಪಗಳು ಬೆಂಗಳೂರಿನ ವೆಂಕಟಪ್ಪ ಆರ್ಟ್ ಗ್ಯಾಲರಿಯ ಒಂದು ಕೋಣೆಯಲ್ಲಿ ಪ್ರದರ್ಶಿಸಲ್ಪಟ್ಟಿವೆ. ಈ ಶಿಲ್ಪಗಳು ದಿನಾಂಕ 29-6-1967ರಂದು ಕರ್ನಾಟಕ ಸರ್ಕಾರದ ವಸ್ತು ಸಂಗ್ರಹಾಲಯಕ್ಕೆ ರಾಜಾರಾಮ್‌ರವರ ಕುಟುಂಬ ಕೊಡುಗೆಯಾಗಿ ನೀಡಿದೆ. ಮ್ಯೂಸಿಯಂ ಹಾಗೂ ರಾಜಾರಾಮ್‌ರವರ ಕುಟುಂಬಗಳೆರಡೂ ಕೂಡಿಸಿಟ್ಟಿರುವ ದೊಡ್ಡ ಮೊತ್ತದ ಹಣದಿಂದ ಪ್ರತಿವರ್ಷ ಶಿಲ್ಪ ವಿದ್ಯಾರ್ಥಿಯೊಬ್ಬರಿಗೆ ಸಿ.ವಿ. ರಾಜಾರಾಮ್‌ರವರ ಹೆಸರಿನಲ್ಲಿ ಶಿಷ್ಯವೇತನವನ್ನು ನೀಡಿ ಪ್ರೋತ್ಸಾಹ ನೀಡಲಾಗುತ್ತಿದೆ.

## ಪುಸ್ತಕ ಪ್ರೀತಿ

ಪುಸ್ತಕಗಳು ನಮ್ಮ ಆತ್ಮೀಯ ಸ್ನೇಹಿತರಷ್ಟೇ ಪ್ರಮುಖ ಪಾತ್ರವಹಿಸುತ್ತವೆ. ರಾಜಾರಾಮ್‌ರವರ ಸಂಗ್ರಹದಲ್ಲಿದ್ದ ಪುಸ್ತಕಗಳನ್ನು ಗಮನಿಸಿದರೆ ಶಿಲ್ಪಕಲೆಯ ಆಧುನಿಕ ಪ್ರಜ್ಞೆಯನ್ನು ಅರಗಿಸಿಕೊಳ್ಳಲು ಅವರಿಗೆ ಹೇಗೆ ಸಾಧ್ಯವಾಯಿತು? ಎಂಬ ಪ್ರಶ್ನೆಗೆ ಉತ್ತರ ಸಿಗುತ್ತದೆ. ಇತಿಹಾಸಪೂರ್ವಕಲೆಯ ಅಧ್ಯಯನವೇ ಅಲ್ಲದೆ ಶಿಲ್ಪಕಲೆಯ ಬೆಳವಣಿಗೆ ನಡೆದು ಬಂದ ಬಗೆಯನ್ನು ಗ್ರಹಿಸಲು ಸಾಧ್ಯವಾಗುವಂತಹ ಪುಸ್ತಕಗಳನ್ನು ಅವರು ಹೊಂದಿದ್ದರು. ಮೈಖೇಲ್ ಏಂಜಲೋ, ರೋಡಿನ್, ಹೆನ್ರಿಮೂರ್‌ರವರುಗಳ ಬದುಕು, ಅಭಿವ್ಯಕ್ತಿಗಳ ಕುರಿತ ಬೃಹತ್ ಗಾತ್ರದ ಪುಸ್ತಕಗಳನ್ನು ಅವರು ಸಂಗ್ರಹಿಸಿದ್ದರು. ಕಲಿಯುವ ಹಸಿವಿನಿಂದ ಅಧ್ಯಯನ ಮಾಡಿದ ಸೂಚನೆಗಳಿವೆ. ಅಂದಿನ ಸಮಕಾಲೀನ

ಕಲೆಯ ಪರಿಚಯ ರೂಪದ ದೊಡ್ಡ ಸಂಪುಟವೂ ಅವರಲ್ಲಿತ್ತು. ಇನ್ನು ನವದೆಹಲಿಯ ಅಖಿಲಭಾರತ ಲಲಿತಕಲೆ ಹಾಗೂ ಕರಕುಶಲ ಕಲೆಗಳ ಸಂಸ್ಥೆಯ (AIFACS) Rooplekha, ಪತ್ರಿಕೆಯ ಹಲವು ಸಂಚಿಕೆಗಳು, Studio ಪತ್ರಿಕೆಯ ಕೆಲವು ಸಂಚಿಕೆಗಳು, ಸಮಕಾಲೀನ ಕಲೆಯ ಹೊಳಹುಗಳನ್ನು ಅವರಿಗೆ ನೀಡಿವೆ. ಬಾಂಬೆ ಆರ್ಟ್ ಸೊಸೈಟಿಯ ಕಲಾ ಪ್ರದರ್ಶನಗಳ ಕೆಟಲಾಗ್‌ಗಳೂ ಅವರ ಸಂಗ್ರಹದಲ್ಲಿದ್ದವು. ಕುತೂಹಲದ ಸಂಗತಿ ಎಂದರೆ ಒಬ್ಬನೇ ಒಬ್ಬ ಭಾರತೀಯ ಕಲಾ ಬರೆಹಗಾರರ ಪುಸ್ತಕವೂ ಅವರ ಸಂಗ್ರಹದಲ್ಲಿ ಕಾಣುವುದಿಲ್ಲ. ಎಲ್ಲವೂ ವಿದೇಶಿ, ಇಂಗ್ಲೀಷ್ ಬರೆಹಗಾರರ ಪುಸ್ತಗಳೇ ಆಗಿವೆ. ಅಂದಿನ ಸಂದರ್ಭದಲ್ಲಿ, ಅವರ ದೃಷ್ಟಿಯ ರೀತಿಯ ಹಿನ್ನೆಲೆಯಲ್ಲಿ ಈ ಅಂಶವನ್ನು ಇಟ್ಟು ನೋಡಬಹುದು. 'Figure drawing for all its worth' ಪುಸ್ತಕದ ಜತೆಗೆ 'the Erotic sculpture of India', ' Sculpture of primitive man', ನಂತಹ ಪುಸ್ತಕಗಳೂ ಅವರ ವಿಶಿಷ್ಟ ವೈವಿಧ್ಯಮಯ ಶಿಲ್ಪ ಪ್ರೀತಿಯನ್ನು ಆಕರ ಮೂಲದ ಆಳವನ್ನು ಬಿಂಬಿಸುತ್ತವೆ.

ಅವರ ಇಡೀ ಪುಸ್ತಕ ಸಂಗ್ರಹ ಅವರಿಗೆ ಹೊರಗಿನ ಕಲೆಯ ಬಗ್ಗೆ ಇದ್ದ ಆಸಕ್ತಿ, ಆಕರ್ಷಣೆ, ಕುತೂಹಲಗಳನ್ನು ತೋರುವಂತಿದೆ. ಹೆಚ್ಚಿನದನ್ನು, ಹೊಸದನ್ನು ಸಾಧಿಸುವ ಅವರ ಮಹತ್ವಾಕಾಂಕ್ಷೆಯ ಹೊಳಹುಗಳು ಅವರ ಶಿಲ್ಪಗಳಲ್ಲಿಯೆ ಅಲ್ಲದೆ ಅವರು ಸಂಗ್ರಹಸಿದ್ದ ಆಕರ ಗ್ರಂಥಗಳ ಮೂಲಕವೂ ನಮ್ಮನ್ನು ತಟ್ಟುತ್ತವೆ.

## ರಾಜಾರಾಮ್‌ರವರ ಸಂಗ್ರಹದಲ್ಲಿದ್ದ ಕೆಲವು ಪುಸ್ತಕಗಳು

### ಅನುಬಂಧ -೧

1. Michelangelo. (Painting, sculpture and architecture) - Ludwing Gold Shcheiden.
2. Les Hommes de le danse - Photographies-de-michelttuet. preface : De keita Fodeba.
3. Exotic Art. W.B. Forman
4. The Art of North East Frontier of India - Verrier Elwin
5. Prehistoric Art.- Forman Poulik.
6. Man & Art, C.A. Burland
7. Classical dance and costumes of India - Kay Ambrose.
8. Indian temples and sculpture - Louis Fredric
9. Auguste Rodin - Phidon Press
10. The Erotic Sculpture of India. - Maxpolfouchat
11. Sculpture of Primitive man - W and W Muensterberger
12. Dictionnaire dele France - Francis Cali and Authaud.
13. Figure drawing for all its worth - Andrew loomis
14. Henry Moore (Sculpture and drawing) Introduction by Herbert Read, Land Humphrs and co, ltd London
15. Studio, July 60, volume 160, number; 807 Studio nove 59, volume 158, number 799.
16. Sculpture (1850-1950)
17. Henry Moore - Geoffery Grigsonis,
18. The Bombay art society (60th annual exhibition).
19. Sculpture (1850 & 1950)
20. Der Frager - Gedanken
21. Contemporary Art - Pagan.

## ಅನುಬಂಧ -೨

ರಾಜರಾಮ್‌ರವರ ಮರಣದ ನಂತರ ಅವರ ತಂದೆಗೆ ಖ್ಯಾತ ಕಲಾವಿದ ಸತೀಶ್ ಗುಜ್ರಾಲ್ ಬರೆದ ಪತ್ರ :

**Satish / Gururaj**
N. 1., Constitution House
New delhi, camp : Tokyo
July 12, 1961.

*Dear Shri Ponnappa,*

I, just a few minutes ago met Mrs, Tagochi and had the shock of my life. How could it happen! Alas, my friend, my brother, Raja is no more I cannot believe it. It only weakens my faith in living-please excuse me for expressing myself that way for I should try to console you this hour of misfortune. But only if you could see what has befallen me you would understand my helplessness. Raja meant so much to me, in so many ways-as a man, a friend, and as as artist, and in every way he proved himself to be a man of no mean stature. Both I and my wife, and many other members of my family, came to know Raja very closely and admired him as much as did I. My wife is with me in Tokyo, and is awfully struck by the news, as myself. Please be assured that Raja is going to live as long as do we, if not longer, in the memories of others.

In the train from Kamakura to Tokyo, aftre having heard of Raja's last Journey. I had been thinking of the ways and means to enshrine his memory the work of such an artist could not be left in uncertainty. I understand you want to arrange an exhibition of Raja's work. That is easy and I will

take care of it when I get back to New delhi. But the exhibition is a very small affair. We may arrange a few in different cities but we ought to forge some more lasting method. I will see that some of the pieces are bought by the Jaipur House Museum in New delhi. But still something more is needed. I want something which will do credit to all his work.

I have a rough idea; we should form a memorial fund in the name of Raja ram, the purpose which will be to build a museum of Modern Art with high standards. The total works of Raja will be placed in one room. This museum will have the best of Indian art to-day, to start with. I am confident of getting such works from worthy artists, as gifts to the museum. We may require about Rs. 5 Lakh, to have a suitable building and other facilities. I hope to get land from the Government as a gift. I also hope to get generous contributions from some foreign foundations. To start with we form a small committee, and you and myself should be the first contributors. I am a poor artist and cannot spare much, but will give Rs. 5,000 to start with, and five of my best paintings worth twice the above amount.

It you come to New Delhi in the near future we shall discuss the details of our programme. In the meantime you just tell me of your reaction to my ideas.

We have been away from India for the last six month. It was only yesterday that we reached Tokyo. We will be back in New delhi on 23rd July, a little after you get this letter. Please do not hestitate to ask me for anything that would be of service to dear Raja of you.

Sincerely

**Satish Gujral**

## ಅನುಬಂಧ -೩

ಕೊಹಿಮಾದಿಂದ ಅನಾಮಧೇಯ ಅಬಿಮಾನಿಯೊಬ್ಬರಿಂದ ರಾಜಾರಾಮ್ ಮರಣದ ನಂತರ ಕಳುಹಿಸಲಾದ ಶೋಕ ಸಂದೇಶದೊಂದಿಗೆ ಇದ್ದ ಕವನ ಇದು.

I danced, and cried, and found with a friend
New veins in life's lost goldmine
I tried to catch the rainbow's end
And paint the clouds with sunshine.
The high hills caught his summer breath,
Jealous of fame unsung,
But he laughed at them, and cheated death,
By the god's love, dying young.
I do not care, hereafter,
If he wins the world of art,
For his ocean waves of laughter
Are carved upon my heart.
Why fan or douse the ember?
Or sing sad songs? Or fret?
If he can, he will remember;
And I will not forget!

ಅನುಬಂಧ -೪

# Record of Service

1. The late Major C.P. Rajaram Joined the Indian Armed Forces, In the Royal Indian Engineers, as a 21 Lt on 12 Sep 1948.

2. He attended thye third regular course at the Indian Military Academy, Dehra Dun from Jan 47 to Sep 48. The Commandant of the Academy in his final report on 2Lt C.P. Rajaram described him as a cadet with a good personality, intelligent and who displayed originality in his ideas. At the Academy he was a good sportsman, especially in Tennis, Athletics and Hockey, Arts and Crafts and Photography were his hobbies.

3. On passing out from the Academy he was posted to Bombey Engr Group and Centre Kirkee on 27 Sep 48 and then to 441 (Bombey) Para Fd Coy. on 16 Nov 48 where he qualified as a paratrooper. On 12 he was promoted as Lt and served in Bombey Enger Group and centre and 411 Para Fd Cov, On 19 Mar 53 he was promoted as Capt and was appointed OCTrg Coy, Bombay Enger Group Centre. He attended Young Enger Officers course at CME Kirkee from 10 Jan 49 to 12 May 51 and qualified for exemption from passing Sectons 'A' and 'B' of AMIE (I).

4. In his report on Capt C. P. Rajaram the OC 411 (Bom) para Fd Coy described him as an extremely fit and athletic officer, excellent at PT and games. He played Tennis for the Command. Very social and good at parties. Had plenty of dash and spirit. Essentially the type who does much better in war than during peace. he was

appointed Adjutant Trg Bn Bombay Engr Group Kirkee peace. He was appointed Adjutant Trg Bn Bombay Engr Group Kirkee on 1 Apr 54. He attended Engr Officer Advanced Bridging Course at CME Kirkee from 3 Jan 55 to Mar 55 and Junior Commander Course at the Infantry School Mhow from 2 Apr 55 to 30 Jun 56.

5. He was Appointed Assistant Instrucor Bridging School at CME Kirkee on 23 Jul 55 got a good report from the Commandant who described him as an inteligent officer with plenty of dash and commonsense, Thereafter he was posted to 632 Corps Tps Engrs and was appointed as 2nd in-Comd of Headquarters Engrs from 26 Sep 57 to 3 dec 57.

6. On 17 Jul 59 he was promoted to the rank of Major and was given the Command of 371 Fd Coy. His Brigade Commander described him as a hardworking and reliable officer who is interested in his profession. Possesses initiative and drive and ia a tireless worker. He has a great deal of self confidence and has won the confidence of his men. Well suited for command, he is energetic, resourceful and a good leader. Sets high standard of personal example. His loyality and integrity are of highest order. A very fine sports man who plays most games well. A born sculptor who had alredy acquired fame for his originality in this hobby.

ಅನುಬಂಧ -೫

# RECORD OF SERVICE OF MAJOR C.P. RAJARAM (IC 4010), ENGINEERS

| Rank | Unit | Appointment | Dates of Occurance |
|---|---|---|---|
| 22/Lt | BEG KIRKEE | posted to Centre | 26 Sep 48 to 15 Nov 48 |
| " | 411 Para Fd Coy | Pl Comdr | 16 Nov 48 to dec 48 |
| " | CME KIRKEE | No 2 Long degree Engineering course | Jan 49 to May 51 |
| " | | promoted G of to substantive it 1 Notn No : 294/51 | 12 sep 50 |
| " | " | Posted to BEG on completion of course | 12 May 51 |
| Lt | 411 Para Fd coy | P1Comdr | 22 Jul 51 to 13 Mar 53 |
| A/Capt | TB BEG | Coy Comdr OC Trg coy | 14 Mar 53 |
| " | " | Promoted to A/capt | 19 Mar 53 |
| " | " | Promoted to | 12 Sep 54 |
| G of 1 Notn No | | Substantive Capt | 48 of 8.1.55 |
| Capt | " | Relinquished Adij T Bn | 1 Jul 54 |
| " | " | Appointed Coy Comdr Trg Coy vice capt B.M. Rai | 1 Jul 54 |
| " | " | Relinquished Comd Trg Coy/T Bn | 9 Apr 55 |
| " | " | Relinquished Comd Trg Coy/T Bn | 9 Apr 55 |
| " | " | Appointed Comd HQ Coy/Trg Bn Vice capt T.R. Ramakrishnan | 9 Apr 55 |
| " | " | Posted to CME KIRKEE | 20 Jul 55 |

| Rank | Unit | Appointment | Dates of Occurance |
|---|---|---|---|
| " | " | Relinquished the appointment of Capt HQ Coy/Trg Bn | 20 Jul 55 |
| " | CME KIRKEE | Posted from BEG | 20 Jul 55 |
| " | " | Appointed Instructor Class "C" vice Capt P.M. Bhatia | 23 Jul 55 |
| " | " | SOS and held supernumerary to est to attend JC-24 course at Inf School Mhow | 30 Mar 56 |
| " | " | TOS | 2 Jul 56 |
| " | " | Re-assumed Instr Class "C" (FE Wing) | 2 Jul 56 |
| " | HQ 632 CT Engrs | Posted in from CME KIRKEE | 17 sep 57 |
| " | " | Appointed 2 ICin an existing vacancy | 26 Sep 57 |
| " | " | Promoted to A/Major for the Period | 26 Sep to 3 dec 57 4 Dec 57 |
| " | " | Relinquished 2 IC | |
| " | 371 Fd Coy | Posted in from 632 CT Engrs | 5 Jul 59 |
| " | HQ 632 | Posted out to 371 Fd Coy CT Engrs | 5 Jul 59 |
| " | 371 Fd Coy | Appointed OC of 371 Fd Coy | 17 Jul 59 |
| " | " | Promoted to A/Major | 17 Jul 59 |
| A/Major | " | Entered Naga Hills District | 6 Sep 60 |
| " | " | left Naga Hills District | 11 Dec 60 |
| " | " | Died at Fd suspected Pneumonia | 8 Jun 61 |

# ಟಿಪ್ಪಣಿಗಳು

1 ಬ್ರಿಟೀಷ್ ಶಿಲ್ಪಿ ಹೆನ್ರಿಮೂರ್ (1898-1986) 1919-25ರ ನಡುವೆ ಲಂಡನ್ನಿನ ಲೀಡ್ಸ್ ಕಾಲೇಜ್ ಆಫ್ ಆರ್ಟ್ ಮತ್ತು ರಾಯಲ್ ಕಾಲೇಜ್ ಆಫ್ ಆರ್ಟ್‌ಗಳಲ್ಲಿ ಕಲಿತವರು. 1936ರ ಇಂಗ್ಲೀಷ್ ಸರ್ರಿಯಲಿಸ್ಟ್ ಗುಂಪಿನ ಸಂಸ್ಥಾಪಕ ಸದಸ್ಯರು. ಸಾರ್ವಜನಿಕ ಶಿಲ್ಪಕಲೆಗೆ ಅಪೂರ್ವ ಕೊಡುಗೆ ನೀಡಿದವರು. ಅವರ ಶಿಲ್ಪಗಳು ನವದೆಹಲಿ, ಹಾಗೂ ಬೆಂಗಳೂರುಗಳಲ್ಲಿ ಪ್ರದರ್ಶಿಸಲ್ಪಟ್ಟಿದೆ.

2 Brian wallis ರವರ ಬರೆಹವೊಂದರ ಶೀರ್ಷಿಕೆ, "Museum culture; His tories, Discourses, spectacles," edited, Daniel J. sherman and Irit Rogoff, Minne apolis: University Minnesota press, 1994.

3 Progressive Artists' Group, Mumbai, founded by F.N.Souza, M.F. Hussain, K.H. Ara, H.A. Gade, S.K. Bakre and S.H. Raza

4 In March 1959 Rajaram exhibited his works in Bombay and was greeted by the public with great warmth. The few last works which he was to carve out in 1960-61 evdence to his arrival at the stage when his geniuscould mould almost anything at will.

**- Mulk Raj Anand**

Marg, 1962.

5 20ನೆಯ ಶತಮಾನದ ದೃಶಕಲೆಯ ಹಲವು ಹೊಸತನಗಳನ್ನು ಸಾಧಿಸಿದ ಅಲೆಕ್ಸಾಂಡರ್ ಕಾಲ್ಡರ್ ಅಮೆರಿಕದ ಶಿಲ್ಪಿ. ಕಾಲ್ಡರ್‌ನ 1928ರ ಮರದ 'Cow,' ' Woman', ' Woman with umbrella' (1928,wood 25 ಇಂಚು) 1920ರಲ್ಲೇ ಹಲವು ಬೆಳವಣಿಗೆಗಳ ಕಾರಣ ಹೊಸ ಹಾದಿಗಳನ್ನು ಅನ್ವೇಷಿಸಿಕೊಂಡ ಕಾಲ್ಡರ್ ಜನಪದ ಕಲೆಯ ಬಗ್ಗೆ ಹೆಚ್ಚಾದ

ಎಚ್ಚರದ ಕಾರಣದಿಂದ ಅದನ್ನು Viable Sourse ಆಗಿ ತನ್ನ ಮರದ ಶಿಲ್ಪಗಳಲ್ಲಿ ದುಡಿಸಿಕೊಂಡನು. ' I made things in wood, taking a lump of wood and making very little alteration in its shape; just enough to turn it into somthing different' ಎಂದು ಕಾಲ್ಡರ್ ಹೇಳಿಕೊಂಡಿದ್ದಾನೆ.

**- Alexander Calder**

Joan marter,

Cambridge university press.

# ಶಿಲ್ಪಕಲಾ ಅಕಾಡೆಮಿಯ ಪ್ರಕಟಣೆಗಳು

| | |
|---|---|
| ಜಕಣಾಚಾರ್ಯ | ರೂ. ೪೦.೦೦ |
| ಶಿಲ್ಪ ಸಂಕುಲ | ರೂ. ೨೫.೦೦ |
| ಕಲಾರಾಧನೆ | ರೂ. ೨೫.೦೦ |
| ಹೊಯ್ಸಳ ಶಿಲ್ಪಕಲೆ (ಶಿಲ್ಪಸಂಪುಟ) | ರೂ. ೫೦.೦೦ |
| ಶ್ರೀ ಕಾಶ್ಯಪ ಶಿಲ್ಪಶಾಸ್ತ್ರಂ | ರೂ. ೨೨೫.೦೦ |
| ಶಿಲ್ಪಬ್ರಹ್ಮ<br>ಶ್ರೀ. ಪರಮೇಶ್ವರಾಚಾರ್ಯ | ರೂ. ೧೫.೦೦ |
| ಉತ್ತುಂಗ ಕುಶಲಶಿಲ್ಪಿ<br>ದೇವಲಕುಂದ ವಾದಿರಾಜ್ | ರೂ. ೧೫.೦೦ |
| ಶಿಲ್ಪಸಿದ್ಧಾಂತಿ ಶ್ರೀ ಸಿದ್ಧಲಿಂಗ ಸ್ವಾಮಿಗಳು | ರೂ. ೫೦.೦೦ |
| ಶಿಲ್ಪಸಿದ್ಧಾಂತಿ ಶ್ರೀ ಸಿದ್ಧಲಿಂಗ ಸ್ವಾಮಿಗಳು<br>ಶಿಲ್ಪ – ಚಿತ್ರಸಂಪುಟ | ರೂ. ೫೦.೦೦ |
| ಸಾತ್ವಿಕ ಶಿಲ್ಪಿ ನಾಗೇಂದ್ರ ಸ್ಥಪತಿ | ರೂ. ೧೫.೦೦ |
| ಶಿಲ್ಪಕಲಾ ಆರಾಧಕರು | ರೂ. ೨೦.೦೦ |
| ಭಾರತೀಯ ಶಿಲ್ಪಕಲೆ | ರೂ. ೫೦.೦೦ |
| ವರಶಿಲ್ಪಿ ಗುಂಡಪ್ಪ ಮಾಯಾಚಾರ್ಯ | ರೂ.೧೫.೦೦ |
| ಕೆ. ಶಾಮರಾಯ ಆಚಾರ್ಯ | ರೂ. ೧೫.೦೦ |
| ಎನ್. ಜಿ. ನೀಲಕಂಠಾಚಾರ್ | ರೂ. ೧೫.೦೦ |
| ರೂಪ ಲಕ್ಷಣ ಸಂಗ್ರಹ ಭಾಗ-೧ | ರೂ. ೨೦೦.೦೦ |
| ಕಲಾಚರಿತ್ರೆ ಭಾಗ - ೧ | ರೂ. ೧೦೦.೦೦ |
| ಶ್ರೀ ಶಿವಾಜಪ್ಪನವರ ರೇಖಾಚಿತ್ರಗಳು | ರೂ. ೧೦೦.೦೦ |
| ಎನ್. ಪಿ. ಶ್ರೀನಿವಾಸಚಾರ್ | ರೂ. ೧೫.೦೦ |
| ಸಮಕಾಲೀನ ಸಂಪುಟ | ರೂ. ೫೦.೦೦ |